# ಕರ್ನಾಟಕ ವಿಧಾನಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 633 (770)
ಮಾನ್ಯ ಸದಸ್ಯರ ಹೆಸರು : ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ವಿಷಯ : ಪ್ರವಾಸೋದ್ಯಮ ನಿಗಮದಲ್ಲಿ ಬರುವ ಆಸ್ತಿಗಳ ಬಗ್ಗೆ
ಉತ್ತರಿಸಬೇಕಾದ ದಿನಾಂಕ : 25.09.2020
ಉತ್ತರಿಸಬೇಕಾದವರು : ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು

*******

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| 1. | ಕರ್ನಾಟಕ ರಾಜ್ಯ ಪ್ರವಾಸೋದ್ಯಮ ನಿಗಮದ ಅಧೀನದಲ್ಲಿ ಬರುವ ಆಸ್ತಿಗಳು ಯಾವುವು; ಅವು ಎಲ್ಲಿವೆ; ಅವುಗಳನ್ನು ಯಾವ ಕೆಲಸಗಳಿಗೆ ಉಪಯೋಗಿಸಿಕೊಳ್ಳಲಾಗುತ್ತಿದೆ; | ಮಾಹಿತಿಯನ್ನು ಅನುಬಂಧ-01 ರಲ್ಲಿ ಒದಗಿಸಿದೆ. |
| 2. | 2001ನೇ ಸಾಲಿನಿಂದ ಇಲ್ಲಿಯವರೆಗೆ ಸದರಿ ಆಸ್ತಿಗಳಲ್ಲಿ ಎಷ್ಟು ಆಸ್ತಿಗಳನ್ನು ಬೇರೆಯವರಿಗೆ /ಸಂಸ್ಥೆ/ ಇತರರಿಗೆ ಕ್ರಯ /ಗುತ್ತಿಗೆ/ ಇತರೆ ಮಾಡಿಕೊಳ್ಳಲಾಗಿದೆ; | ಮಾಹಿತಿಯನ್ನು ಅನುಬಂಧ-02 ರಲ್ಲಿ ವಿವರಿಸಲಾಗಿದೆ |
| 3. | ಪ್ರವಾಸೋದ್ಯಮ ಆಸ್ತಿಗಳನ್ನು ರಕ್ಷಿಸಿ ಪ್ರವಾಸೋದ್ಯಮವನ್ನು ಉತ್ತೇಜಿಸಲು ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ; (ವಿವರವಾದ ಮಾಹಿತಿ ನೀಡುವುದು) | 1. ಜಿಲ್ಲಾ ಮಟ್ಟದ ಸಮಿತಿ ಮತ್ತು ಸ್ಥಳಿಯ ಸಂಸ್ಥೆ-ಆಡಳಿತಗಳ ಮೂಲಕ ಇಲಾಖೆಯ ಆಸ್ತಿಗಳನ್ನು ರಕ್ಷಿಸಲು ಕ್ರಮ ಕೈಗೊಳ್ಳಲಾಗಿದೆ.<br>2. ಕರ್ನಾಟಕ ಪ್ರವಾಸೋದ್ಯಮವನ್ನು ಪ್ರಚಾರಪಡಿಸಲು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮೇಳಗಳು, ರೋಡ್‌ಶೋ ಗಳಲ್ಲಿ ಭಾಗವಹಿಸಲಾಗುತ್ತಿದೆ ಹಾಗೂ ಸಾಮಾಜಿಕ ಜಾಲತಾಣಗಳಲ್ಲಿ ಹೆಚ್ಚು ಹಿಂಬಾಲಕರನ್ನು ಹೊಂದುವ ಮೂಲಕ ಸಕ್ರಿಯವಾಗಿದೆ. ಇಲೆಕ್ಟ್ರಾನಿಕ್ ಮತ್ತು ಮುದ್ರಣ ಮಾಧ್ಯಮಗಳಲ್ಲಿ ಕಾಲಕಾಲಕ್ಕೆ ಇಲಾಖೆಯ ವತಿಯಿಂದ ಜಾಹಿರಾತುಗಳನ್ನು ನೀಡುತ್ತಿದೆ. |
| 4. | ವಿಶ್ವ ಪಾರಂಪರಿಕ ತಾಣಗಳು ಕರ್ನಾಟಕದಲ್ಲಿ ಇದ್ದಾಗ್ಯೂ ಕರ್ನಾಟಕವು ಕೇರಳ ಪ್ರವಾಸೋದ್ಯಮಕ್ಕಿಂತ ಹಿಂದೆ ಇರಲು ಕಾರಣಗಳೇನು; ಇದರ ಸಂಬಂಧ ಪ್ರವಾಸೋದ್ಯಮ ಅಭಿವೃದ್ದಿ ಪಡಿಸಲು ಸರ್ಕಾರ ಯಾವ ಕಾರ್ಯಕ್ರಗಳನ್ನು ಹಮ್ಮಿಕೊಂಡಿದೆ? | 1. ಕರ್ನಾಟಕದಲ್ಲಿ ಈಗಾಗಲೇ ಮೂರು ತಾಣಗಳಾದ ಹಂಪಿ, ಪಟ್ಟದಕಲ್ಲು ಹಾಗೂ ಪಶ್ಚಿಮ ಘಟ್ಟಗಳು ವಿಶ್ವ ಪಾರಂಪರಿಕ ತಾಣಗಳ ಪಟ್ಟಿಯಲ್ಲಿ ಸೇರಿದ್ದು, ಬೇಲೂರು-ಹಳೇಬೀಡು, ಐಹೊಳೆ-ಪಟ್ಟದಕಲ್ಲು, ಬಾದಾಮಿ, ಶ್ರೀರಂಗಪಟ್ಟಣ ಹಾಗೂ ಡೆಕ್ಕನ್ ಸುಲ್ತಾನೇಟ್ ಸ್ಮಾರಕಗಳನ್ನು ವಿಶ್ವಪಾರಂಪರಿಕ ತಾಣಗಳ ಪಟ್ಟಿಯಲ್ಲಿ ಸೇರಿಸಲು ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿರುತ್ತದೆ.<br>2. 2020-25ನೇ ಸಾಲಿನ ಪ್ರವಾಸೋದ್ಯಮ ನೀತಿಯಲ್ಲಿ ಕಡಲ ತೀರಗಳು, ಪಾರಂಪರಿಕ, ಸಂಸ್ಕೃತಿಕ ಹಾಗೂ ಪ್ರಾಕೃತಿಕ ತಾಣಗಳನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ನೀಲಿನಕ್ಷೆಯನ್ನು ಸಿದ್ಧಪಡಿಸಲಾಗಿದೆ ಹಾಗೂ ಪ್ರಸ್ತುತ ಇರುವ ಪಾರಂಪರಿಕ ತಾಣಗಳನ್ನು ಸಂರಕ್ಷಿಸಲು ಕ್ರಮವಹಿಸಲಾಗುತ್ತಿದೆ. |

ಸರ್ಕಾರ ಟಿಓಆರ್ 187 ಟಿಡಿವಿ 2020

(ಸಿ.ಟಿ.ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.